# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೭, ೨೦೧೫ (ಭಾದ್ರಪದ ೨೬, ಶಕ ವರ್ಷ ೧೯೩೭)<br>Bengaluru, Thursday, September 17, 2015 (Bhadrapada 26, Shaka Varsha 1937) | ಸಂಚಿಕೆ ೩೮<br>Issue 38 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾರ್ಮಿಕ ಸಚಿವಾಲಯ

**ವಿಷಯ** : ಪ್ರಥಮ ದರ್ಜೆ ಸಹಾಯಕರ ಹುದ್ದೆ ಸೃಜನೆ ಕುರಿತು.

**ಓದಲಾಗಿದೆ** : 1. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ: ಅಭಿವೃದ್ಧಿ/38/212–13 ದಿನಾಂಕ: 16–02–2015.

**ಪ್ರಸ್ತಾವನೆ:**

ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ ಪತ್ರದಲ್ಲಿ ಇಲಾಖೆಯ ಅಧೀನಕ್ಕೆ ಒಳಪಡುವ ಕಾ.ರಾ.ವಿ. ಚಿಕಿತ್ಸಾಲಯಗಳಲ್ಲಿ, 3,000 ವಿಮಾದಾರರನ್ನು ಅನುಬಂಧಿಸಲಾಗಿದ್ದು, ಇವುಗಳಲ್ಲಿ ಬಹಳಷ್ಟು ಕಾ.ರಾ.ವಿ. ಚಿಕಿತ್ಸಾಲಯಗಳಲ್ಲಿ ಇ.ಎಸ್.ಐ. ನಾರಮ್ಸ್ ಅನುಸಾರ 3,000, 5,000, 10,000 ಹಾಗೂ ಅದಕ್ಕೂ ಹೆಚ್ಚಿನ ವಿಮಾದಾರರನ್ನು ಅನುಬಂಧಿಸಲಾದ ಚಿಕಿತ್ಸಾಲಯಗಳಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಲು ಅವಕಾಶವಿರುತ್ತದೆ. ಇಲಾಖೆಯ 59 ಕಾರಾವಿ ಚಿಕಿತ್ಸಾಲಯಗಳಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆ ಮಂಜೂರಾಗಿರುವುದಿಲ್ಲ. ಚಿಕಿತ್ಸಾಲಯಗಳ ಆಡಳಿತಾತ್ಮಕ ಹಿತದೃಷ್ಟಿಯಿಂದ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಅತೀ ಅವಶ್ಯಕವಾಗಿರುತ್ತದೆ. ಇತ್ತೀಚೆಗೆ ವಿಮಾದಾರರ ಗರಿಷ್ಠ ವೇತನದ ಮಿತಿಯನ್ನು ರೂ. 10,000/– ದಿಂದ ರೂ. 15,000/–ಕ್ಕೆ ಹೆಚ್ಚಿಸಲಾಗಿದ್ದು, ಹಾಗೂ ಖಾಸಗಿ ವಿದ್ಯಾ ಸಂಸ್ಥೆಗಳು ಮತ್ತು ಖಾಸಗಿ ಆಸ್ಪತ್ರೆ ನರ್ಸಿಂಗ್ ಹೋಂ ನೌಕರರು ಸಹಾ ಇ.ಎಸ್.ಐ. ಯೋಜನೆ ವ್ಯಾಪ್ತಿಗೆ ಒಳಪಡುತ್ತಿರುವುದರಿಂದ ಇ.ಎಸ್.ಐ. ಸೌಲಭ್ಯವನ್ನು ಪಡೆಯಲು ಚಿಕಿತ್ಸಾಲಯಗಳಲ್ಲಿ ಕೆಲಸ ಕಾರ್ಯಗಳ ಒತ್ತಡ ಹೆಚ್ಚಾಗಿರುವ ಕಾರಣ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸುವುದು ಅತ್ಯಗತ್ಯವಾಗಿದೆಯೆಂದು ತಿಳಿಸಿದ್ದಾರೆ.

ಇಲಾಖೆಯ 59 ಚಿಕಿತ್ಸಾಲಯಗಳಿಗೆ ತಲಾ 2 ರಂತೆ ಒಟ್ಟು 70 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಲು ವಾರ್ಷಿಕ ರೂ. 99.37 ಲಕ್ಷಗಳು ಅಂದಾಜು ವೆಚ್ಚ ಉಂಟಾಗುತ್ತದೆ. ಇದರಲ್ಲಿ ಕಾ.ರಾ.ವಿ. ನಿಗಮದ ಪಾಲು ರೂ. 86.95 ಲಕ್ಷ ಆಗಿದ್ದು, ಇದರಲ್ಲಿ ರಾಜ್ಯ ಸರ್ಕಾರದ ಪಾಲು ಕೇವಲ ರೂ. 12.42 ಲಕ್ಷಗಳಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 78 ಎಲ್ಎಸ್ಐ 2015, ದಿನಾಂಕ: 26–06–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯಲ್ಲಿನ 32 ಚಿಕಿತ್ಸಾಲಯಗಳಿಗೆ ಈ ಕೆಳಕಂಡಂತೆ ಒಟ್ಟು 33 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಿ ನಿಯಮಾನುಸಾರ ಭರ್ತಿ ಮಾಡಲು ಮತ್ತು ಇಲಾಖೆಯಲ್ಲಿ ಅಸ್ತಿತ್ವದಲ್ಲಿದ್ದು ಖಾಲಿಯಿರುವ 24 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಇಲಾಖೆಯು ಪ್ರಸ್ತಾಪಿಸಿದಂತೆ ಪದೋನ್ನತಿ ಮುಖಾಂತರ ತುಂಬಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಕಾ.ರಾ.ವಿ. ಚಿಕಿತ್ಸಾಲಯಗಳ ಹೆಸರು | ಅನುಬಂಧಿಸಲಾದ ವಿಮಾದಾರರ ಸಂಖ್ಯೆ | ಕಾ.ರಾ.ವಿ. ಮಾರ್ಗಸೂಚಿ ಪ್ರಕಾರ ಪ್ರದ.ಸ.ರ ಅವಶ್ಯಕವಿರುವ ಪ್ರಮಾಣ |
|---|---|---|---|
| 1 | ದಾಸರಹಳ್ಳಿ | 80000 | 1 |
| 2 | ರಾಜಾಜಿನಗರ – 2 | 22002 | 1 |

| ಕ್ರಮ ಸಂಖ್ಯೆ | ಕಾ.ರಾ.ವಿ. ಚಿಕಿತ್ಸಾಲಯಗಳ ಹೆಸರು | ಅನುಬಂಧಿಸಲಾದ ವಿಮಾದಾರರ ಸಂಖ್ಯೆ | ಕಾ.ರಾ.ವಿ. ಮಾರ್ಗಸೂಚಿ ಪ್ರಕಾರ ಪ್ರ.ದ.ಸ.ರ ಅವಶ್ಯಕವಿರುವ ಪ್ರಮಾಣ |
|---|---|---|---|
| 3 | ಜಯನಗರ | 24991 | 1 |
| 4 | ಕೆ.ಆರ್.ಪುರಂ–2 | 13223 | 1 |
| 5 | ಮೈಸೂರು ರಸ್ತೆ | 24714 | 1 |
| 6 | ಪೀಣ್ಯ | 69024 | 1 |
| 7 | ಯಶವಂತಪುರ | 39369 | 1 |
| 8 | ಬೊಮ್ಮಸಂದ್ರ | 85063 | 1 |
| 9 | ಭದ್ರಾವತಿ | 25000 | 2 |
| 10 | ಹುಬ್ಬಳ್ಳಿ | 40000 | 1 |
| 11 | ಶೇಷಾದ್ರಿಪುರಂ | 8000 | 1 |
| 12 | ಸಿಟಿ ದಾವಣಗೆರೆ | 3000 | 1 |
| 13 | ಕುಲಶೇಖರ, ಮಂಗಳೂರು | 3000 | 1 |
| 14 | ಪುತ್ತೂರು | 3001 | 1 |
| 15 | ಬೆಳಗೊಳ | 4000 | 1 |
| 16 | ಗೋಕಾಕ್ | 3000 | 1 |
| 17 | ಹುಲಿಕೋಟೆ | 3000 | 1 |
| 18 | ಬಾಗಲಕೋಟೆ | 3000 | 1 |
| 19 | ಎಂ.ಎಸ್.ಕೆ.ಮಿಲ್ಸ್ | 3915 | 1 |
| 20 | ಶಹಬಾದ್, ಗುಲಬರ್ಗಾ | 3000 | 1 |
| 21 | ರಾಜಾಜಿನಗರ–1 | 27260 | 1 |
| 22 | ಕೆ.ಬಿ. ಬಡಾವಣೆ | 20000 | 1 |
| 23 | ವಿಜಯಪುರ | 6853 | 1 |
| 24 | ಎನ್.ಆರ್.ಮೊಹಲ್ಲಾ, ಮೈಸೂರು | 10000 | 1 |
| 25 | ದಕ್ಷಿಣ ಮೈಸೂರು | 5582 | 1 |
| 26 | ವಿಜಯನಗರ | 15000 | 1 |
| 27 | ಕಾಟನ್‌ಪೇಟೆ | 6117 | 1 |
| 28 | ವಿಶ್ವನೀಡಂ | 6689 | 1 |
| 29 | ಬನಶಂಕರಿ | 15000 | 1 |
| 30 | ಬಸವನಗುಡಿ | 15000 | 1 |
| 31 | ಯಲಹಂಕ | 25000 | 1 |
| 32 | ಚಿತ್ರದುರ್ಗ | 6000 | 1 |
| | | ಒಟ್ಟು | 33 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 262 ವೆಚ್ಚ – 9/2015 ದಿನಾಂಕ: 11–06–2015ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಕ್ಷ್ಮಿದೇವಿ**

ಪೀಠಾಧಿಕಾರಿ–5,

ಕಾರ್ಮಿಕ ಇಲಾಖೆ.

(ಕಾರಾವಿ ಯೋ (ವೈ) ಸೇವೆಗಳು)

PR-398
SC- 100

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಈಸಪ 2013, ದಿ: 17-12-2013.
2. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇಎ/4423/2014-15 ದಿ: 04-05-2015.
3. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇಎ/4740/2015-16 ದಿ: 28-05-2015.
4. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇಎ/4788/2015-16 ದಿ: 06-06-2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಎರಡು ವರ್ಷದವರೆಗೆ ಪುನರ್ ರಚಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ (2) ಮತ್ತು (3)ರ ಪತ್ರಗಳಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು ಇವರು ಸರ್ಕಾರದ ಆದೇಶದನ್ವಯ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಎರಡು ವರ್ಷಗಳ ಅವಧಿಗೆ ರಚಿಸಲಾಗಿದ್ದು, ಈ ಆದೇಶದಲ್ಲಿ ಕೆಲವು ಸಮಿತಿ ಸದಸ್ಯರು ಸೇವಾ ನಿವೃತ್ತಿಯನ್ನು ಹೊಂದಿರುವುದಾಗಿ ತಿಳಿಸಿ, ಸಮಿತಿಗೆ ನೂತನ ಸದಸ್ಯ ಕಾರ್ಯದರ್ಶಿಗಳು ಹಾಗೂ ನೂತನ ಸದಸ್ಯರನ್ನೊಳಗೊಂಡ 14 ಜನರ ನೌಕರರ ಸಂಘದ ಪ್ರತಿನಿಧಿಗಳ ಹೆಸರುಗಳನ್ನು ತಿಳಿಸಿ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಪುನರ್ ರಚಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಹಿಂದಿನ ಆದೇಶಗಳ ಪ್ರಕಾರ ಹೆಚ್ಚುವರಿ ಪ್ರತಿನಿಧಿಗಳ ಸೇರ್ಪಡೆಗೆ ಅವಕಾಶವಿಲ್ಲದಿರುವ ಹಿನ್ನೆಲೆಯಲ್ಲಿ ಇಬ್ಬರು ಪ್ರತಿನಿಧಿಗಳ ಹೆಸರುಗಳನ್ನು ಕೈಬಿಟ್ಟು ಜಂಟಿ ಸಮಾಲೋಚನಾ ಸಮಿತಿ ಪುನರ್ ರಚನೆ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಈಕಾಅ 2015 ಬೆಂಗಳೂರು, ದಿನಾಂಕ: 17.06.2015.**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಈಸಪ 2013 ದಿನಾಂಕ: 17-12-2013ರಲ್ಲಿ ರಚಿಸಲಾಗಿದ್ದ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಸರ್ಕಾರದ ವಿವಿಧ ಇಲಾಖೆಗಳ ಪ್ರಧಾನ ಕಾರ್ಯದರ್ಶಿ ಮತ್ತು ಸಂಘದ ಪ್ರತಿನಿಧಿಗಳನ್ನೊಳಗೊಂಡ ರಾಜ್ಯ ಮಟ್ಟದ ಜಂಟಿ ಸಮಾಲೋಚನಾ ಸಮಿತಿಯನ್ನು ಸರ್ಕಾರವು ಈ ಕೆಳಕಂಡಂತೆ ಪುನರ್ ರಚಿಸಿದೆ.

**ಸರ್ಕಾರದ ಪ್ರತಿನಿಧಿಗಳು**

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) | ಸದಸ್ಯರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 7. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) | ಸದಸ್ಯರು |

**ನೌಕರರ ಸಂಘದ ಪ್ರತಿನಿಧಿಗಳು**

| ಕ್ರಮ ಸಂಖ್ಯೆ | ಹೆಸರು ಮತ್ತು ಕಛೇರಿ ಶ್ರೀ / ಶ್ರೀಮತಿ | ಇಲಾಖೆ |
|---|---|---|
| 1 | ಬಿ.ಪಿ. ಮಂಜೇಗೌಡ, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಹಿರಿಯ ಮೋಟಾರು ವಾಹನ ನಿರೀಕ್ಷಕರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಸಾರಿಗೆ ಇಲಾಖೆ, ಹಾಸನ |
| 2 | ಬಿ.ಎಂ. ಪಟೇಲ್‌ಪಾಂಡು, ಪ್ರಧಾನ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ಪ್ರಥಮ ದರ್ಜೆ ಸಹಾಯಕರು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖಾ ನಿರ್ದೇಶನಾಲಯ, ಖನಿಜ ಭವನ, ಬೆಂಗಳೂರು. |
| 3 | ಹೆಚ್.ಕೆ. ರಾಮು, ಗೌರವಾಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು | ವ್ಯವಸ್ಥಾಪಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು |
| 4 | ಯೋಗಾನಂದ, ಖಜಾಂಚಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು. | ಅಧೀಕ್ಷಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಅರಮನೆ ರಸ್ತೆ, ಬೆಂಗಳೂರು |

| ಕ್ರಮ ಸಂಖ್ಯೆ | ಹೆಸರು ಮತ್ತು ಕಛೇರಿ ಶ್ರೀ / ಶ್ರೀಮತಿ | ಇಲಾಖೆ |
|---|---|---|
| 5 | ಬಸವರಾಜ ಗುರಿಕಾರ, ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಗಾಂಧಿನಗರ, ಬೆಂಗಳೂರು | ಶಿಕ್ಷಣ ಇಲಾಖೆ |
| 6 | ವಿಜಯ ಕುಮಾರ, ಅಧ್ಯಕ್ಷರು, ಕರ್ನಾಟಕ ರಾಜ್ಯ ಕಂದಾಯ ಇಲಾಖಾ ನೌಕರರ ಸಂಘ, ಜಿಲ್ಲಾಧಿಕಾರಿಗಳ ಕಚೇರಿ ಆವರಣ, ಬೆಂಗಳೂರು ನಗರ, ಬೆಂಗಳೂರು | ಕಂದಾಯ ಇಲಾಖೆ |
| 7 | ಬಿ.ಎಂ. ನಟರಾಜ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ಗ್ರೂಪ್ ಡಿ ನೌಕರರ ಸಂಘ, ಬೆಂಗಳೂರು | ಲೋಕೋಪಯೋಗಿ ಇಲಾಖೆ |
| 8 | ತಿಮ್ಮಯ್ಯ, ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ವಾಹನ ಚಾಲಕರ ಕೇಂದ್ರ ಸಂಘ, ಕೆ.ಕೆ.ಗೆಸ್ಟ್‌ಹೌಸ್ ಆವರಣ, ಹೈಗ್ರೌಂಡ್ಸ್, ಬೆಂಗಳೂರು | ವಾಹನ ಚಾಲಕರ ವೃಂದ |
| 9 | ಸ್ಮಿತಾರೆಡ್ಡಿ, ಭಾಷಾಂತರಕಾರರು, ಭಾಷಾಂತರ ಇಲಾಖೆ, ಬೆಂಗಳೂರು | ಭಾಷಾಂತರ ಇಲಾಖೆ |
| 10 | ಆರ್.ಪಿ.ರೆಡ್ಡಪ್ಪ, ಅಧ್ಯಕ್ಷರು, ಕ.ರಾ.ಸ.ನೌಕರರ ಸಂಘ, ಜಿಲ್ಲಾ ಶಾಖೆ, ಚಿಕ್ಕಬಳ್ಳಾಪುರ | ಶಿಕ್ಷಣ ಇಲಾಖೆ |
| 11 | ಹನುಮಂತಪ್ಪ ಲೆಂಗಟಿ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಜಿಲ್ಲಾ ಶಾಖೆ, ಗುಲ್ಬರ್ಗಾ | ಪ್ರಥಮ ದರ್ಜೆ ಸಹಾಯಕರು, ಶಿಕ್ಷಣ ಇಲಾಖೆ (ನಿಯೋಜನೆ-ತಾಲ್ಲೂಕು ಪಂಚಾಯಿತಿ) ಗುಲ್ಬರ್ಗಾ. |
| 12 | ಮಹಾಲಕ್ಷ್ಮಿ, ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು. | ಕರ್ನಾಟಕ ಸರ್ಕಾರ ಸಚಿವಾಲಯ |

ಜಂಟಿ ಸಮಾಲೋಚನಾ ಸಮಿತಿಯ ಅಧ್ಯಕ್ಷರು ಸಮಿತಿಯ ಮೊದಲನೆಯ ಸಭೆಯಲ್ಲಿ ಸದಸ್ಯರೊಡನೆ ಸಮಾಲೋಚಿಸಿ, ಸದಸ್ಯರೊಬ್ಬರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸುವರು.

ದಿನಾಂಕ: 19-10-1972ರ ಸರ್ಕಾರದ ಆದೇಶ ಸಂಖ್ಯೆ: ಜಿಎಡಿ 7 ಡಿಎಸ್‌ಡಬ್ಲ್ಯೂ 69 ಇದರ ನಿಯಮ 7(ಬಿ) ಅನುಸಾರ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಂಟಿ ಸಮಾಲೋಚನಾ ಸಮಿತಿಯು ಎರಡು (2) ವರ್ಷಗಳ ಅವಧಿಯವರೆಗೆ ಕಾರ್ಯ ನಿರ್ವಹಿಸಲಿದೆ.

ಸಮಿತಿಯ ವ್ಯವಹಾರಗಳನ್ನು ದಿ: 19-10-1972ರ ಸರ್ಕಾರದ ಆದೇಶ ಸಂಖ್ಯೆ: ಜಿಎಡಿ 7 ಡಿಎಸ್‌ಡಬ್ಲ್ಯೂ 69 ಮತ್ತು ತದನಂತರ ತಿದ್ದುಪಡಿಗಳಿಗನುಗುಣವಾಗಿ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಎ. ಗಾಯತ್ರಿ**
ಸರ್ಕಾರದ ಉಪ ಕಾರ್ಯದರ್ಶಿ (ಪ್ರಭಾರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು-ಕಾರ್ಯಾಧ್ಯಯನ)

**PR-399**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : 2014-15ನೇ ಸಾಲಿನಲ್ಲಿ ಒಂದು ವರ್ಷದ ಸೇವಾನಿರತ ಡಿ.ಪಿ.ಹೆಚ್. ವ್ಯಾಸಂಗಕ್ಕೆ ನಿಯೋಜನೆಗೊಂಡ ಶುಶ್ರೂಷಕಿಯರಿಗೆ ಪ್ರತಿನಿಯೋಜನಾ ಸೌಲಭ್ಯ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 398 ಹೆಚ್‌ಎಸ್‌ಹೆಚ್ 2014 ದಿನಾಂಕ: 15-10-2014
2. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಡಿಹೆಚ್ & ಪಿ(ಹೆಚ್‌ಇಟಿ)/ಡಿಪಿಹೆಚ್/02/2015-16 ದಿನಾಂಕ: 16-06-2015

**ಪ್ರಸ್ತಾವನೆ:**

2014-15 ನೇ ಸಾಲಿನಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ 31 ವೈದ್ಯಾಧಿಕಾರಿ, 07 ಆಯುಷ್ ವೈದ್ಯರು ಮತ್ತು ಇಬ್ಬರು ಶುಶ್ರೂಷಕಿಯರನ್ನು ಪ್ರಥಮ ಬಾರಿಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಾರ್ವಜನಿಕ ಆರೋಗ್ಯ ನಿರ್ವಹಣೆ (ಡಿ.ಪಿ.ಹೆಚ್.) ವಿಷಯದಲ್ಲಿ ಪಬ್ಲಿಕ್ ಹೆಲ್ತ್ ಫೌಂಡೇಷನ್ ಆಫ್ ಇಂಡಿಯಾದಡಿ ಬರುವ ಪಬ್ಲಿಕ್ ಹೆಲ್ತ್ ಮ್ಯಾನೇಜ್‌ಮೆಂಟ್ ಆಟ್ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಹೆಲ್ತ್, ಮಾಗಡಿ ರಸ್ತೆ, ಬೆಂಗಳೂರು ಇಲ್ಲಿ ನಡೆಯುವ ಒಂದು ವರ್ಷದ ಡಿಪ್ಲೊಮ ವ್ಯಾಸಂಗಕ್ಕೆ ನಿಯೋಜಿಸಲಾಗಿತ್ತು. ಈ ಪೈಕಿ 16 ವೈದ್ಯಾಧಿಕಾರಿಗಳು, 6 ಆಯುಷ್ ವೈದ್ಯರು ಮತ್ತು ಇಬ್ಬರು ಶುಶ್ರೂಕಿಯರು ಸದರಿ ವ್ಯಾಸಂಗಕ್ಕೆ ಹಾಜರಾಗಿರುತ್ತಾರೆ.

ಈ ರೀತಿ ಪ್ರಥಮ ಬಾರಿಗೆ ಸೇವಾನಿರತ ಡಿ.ಪಿ.ಹೆಚ್. ವ್ಯಾಸಂಗಕ್ಕೆ ನಿಯೋಜನೆಗೊಂಡಿರುವ ಒಟ್ಟು 16 ವೈದ್ಯಾಧಿಕಾರಿಗಳು, 6 ಆಯುಷ್ ವೈದ್ಯರು ಮತ್ತು ಇಬ್ಬರು ಶುಶ್ರೂಷಕಿಯರು ವ್ಯಾಸಂಗಕ್ಕೆ ಹಾಜರಾದ ಕುರಿತಂತೆ ಸಿ.ಟಿ.ಸಿ, ಅಫಿಡವಿಟ್ ಹಾಗೂ ನಮೂನೆ 19 ಪರಿಷ್ಕೃತ ಕರಾರು ಬಂಧಪತ್ರ ಹಾಗೂ

ಪೆನಾಲ್ಟಿ ಬಾಂಡ್ ಸಲ್ಲಿಸಿ ವ್ಯಾಸಂಗಕ್ಕೆ ಹಾಜರಾಗಿರುವುದರಿಂದ ಈ ವೈದ್ಯರುಗಳಿಗೆ ಡಿ.ಪಿ.ಹೆಚ್ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡುವಂತೆಯೂ, ಆಯುಷ್ ವೈದ್ಯರು ಮತ್ತು ಶುಶ್ರುಷಕಿಯರಿಗೆ ಸಂಬಂಧಿಸಿದಂತೆ ವೇತನ ಸೆಳೆಯುವ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸುವಂತೆ ಕೋರಿ ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 270 ಹೆಚ್‌ಎಸ್‌ಹೆಚ್ 2015 (ಭಾಗ–1) ಬೆಂಗಳೂರು, ದಿನಾಂಕ: 27–06–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2014–15ನೇ ಸಾಲಿನಲ್ಲಿ ಪಬ್ಲಿಕ್ ಹೆಲ್ತ್ ಫೌಂಡೇಷನ್ ಆಫ್ ಇಂಡಿಯಾದಡಿ ಬರುವ ಪಬ್ಲಿಕ್ ಹೆಲ್ತ್ ಮ್ಯಾನೇಜ್‌ಮೆಂಟ್ ಅಟ್ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಹೆಲ್ತ್, ಮಾಗಡಿ ರಸ್ತೆ, ಬೆಂಗಳೂರು ಇಲ್ಲಿ ನಡೆಯುವ ಒಂದು ವರ್ಷದ ಸಾರ್ವಜನಿಕ ಆರೋಗ್ಯ ನಿರ್ವಹಣೆ (ಡಿ.ಪಿ.ಹೆಚ್.ಎಂ.) ಕುರಿತಾದ ಸೇವಾನಿರತ ವ್ಯಾಸಂಗಕ್ಕೆ ನಿಯೋಜಿಸಲಾಗಿರುವ ಶುಶ್ರೂಷಕಿಯರಾದ ಶ್ರೀಮತಿ ಉಮಾಬಾಯಿ ಹೆಗಡೆ ಅವರು ದಿನಾಂಕ: 11–11–2014 ರಂದು ಮತ್ತು ಶ್ರೀಮತಿ ರೇಚಲ್ ಪಾಲ್‌ರಾಜ್ ಅವರು ದಿನಾಂಕ: 05–11–2014 ರಂದು ವ್ಯಾಸಂಗಕ್ಕೆ ಹಾಜರಾಗಿರುವುದರಿಂದ ಅವರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 61 ನ್ನು ಓದಿಕೊಂಡಂತೆ ಅದೇ ನಿಯಮದ ಅಪೆಂಡಿಕ್ಸ್ II–ಎ I ರ ಪ್ರಕಾರ ವ್ಯಾಸಂಗದ ಅವಧಿಗೆ ಪ್ರತಿನಿಯೋಜನಾ ಸೌಲಭ್ಯವನ್ನು ಮಂಜೂರು ಮಾಡಿದೆ.

ಈ ಶುಶ್ರೂಷಕಿಯರು ವ್ಯಾಸಂಗದ ಅವಧಿಯಲ್ಲಿ ಉಚಿತ ವಸತಿ ಮತ್ತು ಊಟೋಪಚಾರದ ಸೌಲಭ್ಯವನ್ನು ಪಡೆಯುತ್ತಿದ್ದಲ್ಲಿ, ಅವರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ರನ್ವಯ ಅನ್ವಯವಾಗುವ ದಿನಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಸೇವಾನಿರತ ಡಿಪ್ಲೊಮ ವ್ಯಾಸಂಗ ನಡೆಸುತ್ತಿರುವ ಸದರಿ ಶುಶ್ರೂಷಕಿಯರಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಬಟವಾಡೆ ಮಾಡುವ ಅಧಿಕಾರವನ್ನು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರಿಗೆ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 2 ಎಸ್‌ಆರ್‌ಎ 2008 ದಿನಾಂಕ: 05–06–2008 ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**PR- 400**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಎಂ.ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ (ಹಾಲಿ ಪ್ರಿನ್ಸಿಪಲ್ ಸಿಜೆಎಂ ನ್ಯಾಯಾಲಯ, ಚಿಕ್ಕಮಗಳೂರು) ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 91 ಪಿಪಿಇ 2013, ದಿ: 12–06–2013
2. ಉಪ ಲೋಕಾಯುಕ್ತರ ವಿಚಾರಣಾ ವರದಿ ಸಂಖ್ಯೆ: ಲೋಕ್/ಎಆರ್‌ಇ–10/ಇಎನ್‌ಕ್ಯೂ–270/2013, ದಿ: 27–01–2015
3. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ ಒಇ 91 ಪಿಪಿಇ 2013, ದಿ: 04–03–2015
4. ಶ್ರೀಮತಿ ಎಂ.ಸಾವಿತ್ರಿ ಇವರ ವಿವರಣೆ ದಿನಾಂಕ: 15–04–2015

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಶ್ರೀಮತಿ ಎಂ.ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರು ಶಿವಮೊಗ್ಗದ 1ನೇ ಹೆಚ್ಚುವರಿ ಹಿರಿಯ ನ್ಯಾಯಾಲಯದ ಕೋರ್ಟ್ ಕ್ರೈಂ ಸಂ. 244/2009 ರ ಪ್ರಕರಣದಲ್ಲಿ ವಕಾಲತ್ತು ಜಾಮೀನು ಅರ್ಜಿ ಹಾಕಲು ರೂ.500/– ಗಳನ್ನು ಲಂಚವಾಗಿ ಪಡೆಯುತ್ತಿದ್ದಾಗ ದಿನಾಂಕ: 04–07–2009 ರಂದು ಮಾನ್ಯ ಲೋಕಾಯುಕ್ತರ ಬಲೆಗೆ ಸಿಲುಕಿರುತ್ತಾರೆ. ಸದರಿ ಪ್ರಕರಣದ ಹಿನ್ನೆಲೆಯಲ್ಲಿ ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು, 1957ರ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮಾನ್ಯ ಉಪ ಲೋಕಾಯುಕ್ತರು, ಶ್ರೀಮತಿ ಎಂ.ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಚಿಕ್ಕಮಗಳೂರು ಇವರ ವಿರುದ್ಧದ ಲಂಚದ ಆರೋಪಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಕೈಗೊಂಡು, ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯವರು ರೂ.500/– ಗಳನ್ನು ಲಂಚವಾಗಿ ಸ್ವೀಕರಿಸುವ ಆಪಾದನೆಯು ರುಜುವಾತಾಗಿರುವುದಾಗಿ ತಿಳಿಸಿ, ವಿಚಾರಣಾ ವರದಿಯನ್ನು ಸಲ್ಲಿಸಿ, ಶ್ರೀಮತಿ ಎಂ.ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಚಿಕ್ಕಮಗಳೂರು (ಈ ಹಿಂದೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಶಿವಮೊಗ್ಗ) ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8(viii) ರಡಿಯಲ್ಲಿ ಮುಂದಿನ ಸರ್ಕಾರಿ ಸೇವೆಗೆ ಅನರ್ಹಗೊಳಿಸಿ, ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಎರಡನೇ ಕಾರಣ ಕೇಳುವ ಸೂಚನಾ ಪತ್ರವನ್ನು ಆಪಾದಿತ ಅಧಿಕಾರಿಯವರಿಗೆ ಮಾನ್ಯ ಉಪ ಲೋಕಾಯುಕ್ತರ ವಿಚಾರಣಾ ವರದಿಯನ್ನು ಲಗತ್ತಿಸಿ ಕಳುಹಿಸಿ, ಸದರಿ ಅಧಿಕಾರಿಯವರು ತಮ್ಮ ವಿವರಣೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಶ್ರೀಮತಿ ಎಂ.ಸಾವಿತ್ರಿ ಇವರು ಎರಡನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ವಿವರಣೆಯನ್ನು ಸಲ್ಲಿಸುತ್ತಾ ವಿಚಾರಣಾ ಸಮಯದಲ್ಲಿ ಸಾಕ್ಷಿದಾರರುಗಳನ್ನು ವಿಚಾರಣೆಗೆ ಒಳಪಡಿಸಿ, ಸುಳ್ಳು ಸಾಕ್ಷಿಯನ್ನು ನಿರೂಪಿಸಲು ಅವಕಾಶವನ್ನು ನೀಡಿರುವುದಿಲ್ಲವೆಂದು

ಮತ್ತು ಸದರಿ ವಿಚಾರಣೆಯು ಏಕಪಕ್ಷೀಯವಾಗಿ ನಡೆದಿರುತ್ತದೆ ಎಂದು ತಿಳಿಸಿ, ಮಾನ್ಯ ಉಪ ಲೋಕಾಯುಕ್ತರು ಸ್ವಾಭಾವಿಕ ನ್ಯಾಯತತ್ವವನ್ನು ಉಲ್ಲಂಘಿಸಿರುತ್ತಾರೆಂದು ತಿಳಿಸಿರುತ್ತಾರೆ. ಮುಂದುವರೆದು, ಶ್ರೀಮತಿ ಎಂ.ಸಾವಿತ್ರಿ ಇವರು ಎರಡನೇ ಕಾರಣ ಕೇಳುವ ಸೂಚನಾ ಪತ್ರವನ್ನು ಮತ್ತು ಮಾನ್ಯ ಉಪ ಲೋಕಾಯುಕ್ತರು ನೀಡಿರುವ ವಿಚಾರಣಾ ವರದಿಯನ್ನು ಪ್ರಶ್ನಿಸಿ, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ. 4758/2015 ರಲ್ಲಿ ಪ್ರಶ್ನಿಸಿರುತ್ತಾರೆ. ಆದರೆ, ಮಾನ್ಯ ಉಪ ಲೋಕಾಯುಕ್ತರ ವಿಚಾರಣಾ ವರದಿಯ ಕಂಡಿಕೆ–4 ರಲ್ಲಿ ಆಪಾದಿತ ನೌಕರರಿಗೆ ಕಾಲಾವಕಾಶವನ್ನು ನೀಡಿದಾಗ್ಯೂ, ಆಪಾದಿತ ನೌಕರರು ತಮ್ಮ ಪ್ರತಿವಾದವನ್ನಾಗಲೀ ಅಥವಾ ಸಾಕ್ಷಿದಾರರನ್ನು ಸಾಕ್ಷಿಗಾಗಿ ಒದಗಿಸುವುದಾಗಲೀ ಮಾಡಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದುದರಿಂದ, ಈ ಹಂತದಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯು ವಿಚಾರಣೆಯು ಏಕಪಕ್ಷೀಯವೆಂದು ಹೇಳಲು ಬರುವುದಿಲ್ಲ. ಇನ್ನೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಎರಡನೇ ಕಾರಣ ಕೇಳುವ ಸೂಚನಾ ಪತ್ರ ಮತ್ತು ಉಪ ಲೋಕಾಯುಕ್ತರ ವಿಚಾರಣಾ ವರದಿಗೆ ತಡೆಯಾಜ್ಞೆಯನ್ನಾಗಲೀ ಅಥವಾ ಮಧ್ಯಂತರ ಆಜ್ಞೆಯನ್ನಾಗಲೀ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವುದಿಲ್ಲ. ಆದುದರಿಂದ, ಎರಡನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಆಪಾದಿತ ನೌಕರರು ನೀಡಿರುವ ಹೇಳಿಕೆಯು ಊರ್ಜಿತಗೊಳ್ಳುವುದಿಲ್ಲ.

ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ನಿಯಮಾವಳಿಗಳು, 2000 ರಲ್ಲಿನ ನಿಯಮ 5(1) (ಬಿ) ರಲ್ಲಿ ಈ ಕೆಳಕಂಡಂತೆ ತಿಳಿಸಿದೆ.

"Provided that it shall not be necessary to consult the Commission in any case involving disciplinary matters affecting a person serving in connection with the affairs of the State, where the inquiry is conducted by the Lokayukta or the Upalokayuktha or where the recommendations are received from the Lokayuktha or the Upalokayuktha, as the case may be."

ಆದುದರಿಂದ, ಸದರಿ ಪ್ರಕರಣದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆಯುವ ಅವಶ್ಯಕತೆ ಇರುವುದಿಲ್ಲ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಎಂ.ಸಾವಿತ್ರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8(viii) ರಡಿಯಲ್ಲಿ ಮುಂದಿನ ಸರ್ಕಾರಿ ಸೇವೆಗೆ ಅನರ್ಹಗೊಳಿಸಿ, ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 91 ಪಿಪಿಇ 2013, ಬೆಂಗಳೂರು, ದಿನಾಂಕ: 24ನೇ ಜೂನ್ 2015.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಎಂ.ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಚಿಕ್ಕಮಗಳೂರು (ಈ ಹಿಂದೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಮುಖ್ಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಶಿವಮೊಗ್ಗ) ಇವರನ್ನು ಸರ್ಕಾರಿ ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8(viii) ರಡಿಯಲ್ಲಿ ಮುಂದಿನ ಸರ್ಕಾರಿ ಸೇವೆಗೆ ಅನರ್ಹಗೊಳಿಸಿ, ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR-415**

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಉಡುಪಿ ಜಿಲ್ಲೆ, ವರಾಹಿ ಸಮನ್ವಯ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ** : ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ರವರ ಪತ್ರ ಸಂಖ್ಯೆ:ಕನೀನಿ/ವ್ಯ.ನಿ/ಸ.ಇ೦7/2014–15/6006, ದಿನಾಂಕ: 24–01–2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಇವರು, ವರಾಹಿ ಯೋಜನೆಯನ್ನು ಶೀಘ್ರವಾಗಿ ಪೂರ್ಣಗೊಳಿಸುವ ನಿಟ್ಟಿನಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳ ಕುರಿತು, ದಿ: 16–01–2015ರಂದು, ಕುಂದಾಪುರದಲ್ಲಿ, ಮಾನ್ಯ ಜಲಸಂಪನ್ಮೂಲ ಸಚಿವರು, ಕಂದಾಯ ಸಚಿವರು, ಅರಣ್ಯ ಸಚಿವರು ಹಾಗೂ ಉಡುಪಿ ಜಿಲ್ಲಾ ಉಸ್ತುವಾರಿ ಸಚಿವರುಗಳ ಸಮ್ಮುಖದಲ್ಲಿ ಜರುಗಿದ ಸಭೆಯಲ್ಲಿ ಚರ್ಚಿಸಿ, ವರಾಹಿ ನೀರಾವರಿ ಯೋಜನೆಗೆ ಸಂಬಂಧಪಟ್ಟ ಕಾರ್ಯಗಳನ್ನು ತ್ವರಿತವಾಗಿ ನಿರ್ವಹಿಸಲು, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲು ಸೂಚಿಸಲಾಗಿದೆ.

ಅದರಂತೆ, ವರಾಹಿ ನೀರಾವರಿ ಯೋಜನೆಯನ್ನು ತ್ವರಿತವಾಗಿ ನಿರ್ವಹಿಸುವ ಉದ್ದೇಶದಿಂದ, ಜಲಸಂಪನ್ಮೂಲ, ಅರಣ್ಯ, ಕಂದಾಯ ಮತ್ತು ತೋಟಗಾರಿಕೆ ಇಲಾಖೆಗಳ ಕಾರ್ಯನಿರ್ವಹಣೆಯಲ್ಲಿ ಸಮನ್ವಯತೆ ಸಾಧಿಸುವ ದೃಷ್ಟಿಯಿಂದ, ಈ ಸಮಿತಿಯ ಅವಶ್ಯಕತೆ ಇದ್ದು, ಮಾನ್ಯ ಜಿಲ್ಲಾಧಿಕಾರಿಗಳು, ಉಡುಪಿ ಇವರು, ಜಿಲ್ಲಾ ವರಾಹಿ ಸಮನ್ವಯ ಸಮಿತಿಯನ್ನು ರಚಿಸಿ, ಅಧಿಸೂಚನೆ ಹೊರಡಿಸಲು, ದಿ: 20–01–2015ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುವುದಾಗಿ ತಿಳಿಸುತ್ತಾ, ವರಾಹಿ ಸಮನ್ವಯ ಸಮಿತಿಗೆ ಸಹಮತ ಸೂಚಿಸಿ, ಸದರಿ ಸಮಿತಿಯನ್ನು ರಚಿಸಲು ಅಧಿಸೂಚನೆ ಹೊರಡಿಸುವಂತೆ ವ್ಯವಸ್ಥಾಪಕ ನಿರ್ದೇಶಕರು ರವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 2 ಎಂಎಂಎಂ 2015 ಬೆಂಗಳೂರು, ದಿನಾಂಕ: 24–03–2015.**

ವರಾಹಿ ನೀರಾವರಿ ಯೋಜನೆಯನ್ನು ತ್ವರಿತವಾಗಿ ನಿರ್ವಹಿಸುವ ಉದ್ದೇಶದಿಂದ ಹಾಗೂ ಜಲಸಂಪನ್ಮೂಲ, ಅರಣ್ಯ, ಕಂದಾಯ ಮತ್ತು ತೋಟಗಾರಿಕೆ ಇಲಾಖೆಗಳ ಕಾರ್ಯನಿರ್ವಹಣೆಯಲ್ಲಿ ಸಮನ್ವಯತೆ ಸಾಧಿಸುವ ದೃಷ್ಟಿಯಿಂದ, ಅಧಿಕಾರಿ ಸದಸ್ಯರುಗಳನ್ನೊಳಗೊಂಡ ಜಿಲ್ಲಾ ಮಟ್ಟದ ವರಾಹಿ ಸಮನ್ವಯ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು | ಸಮಿತಿಯಲ್ಲಿ ಸ್ಥಾನ |
|---|---|---|
| 1 | ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ | ಅಧ್ಯಕ್ಷರು |
| 2 | ಮುಖ್ಯ/ಅಧೀಕ್ಷಕ ಅಭಿಯಂತರರು, ವರಾಹಿ ನೀರಾವರಿ ಯೋಜನೆ, ಸಿದ್ದಾಪುರ | ಸದಸ್ಯ ಕಾರ್ಯದರ್ಶಿ |
| 3 | ಸಹಾಯಕ ಕಮೀಷನರ್, ಕುಂದಾಪುರ ಉಪ ವಿಭಾಗ. | ಸಮಿತಿ ಸದಸ್ಯರು |
| 4 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಕುಂದಾಪುರ ವಿಭಾಗ, ಕುಂದಾಪುರ | ಸಮಿತಿ ಸದಸ್ಯರು |
| 5 | ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಉಡುಪಿ ಜಿಲ್ಲೆ | ಸಮಿತಿ ಸದಸ್ಯರು |
| 6 | ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಉಡುಪಿ | ಸಮಿತಿ ಸದಸ್ಯರು |
| 7 | ಡಿಡಿಎಲ್ಆರ್, ಉಡುಪಿ ಜಿಲ್ಲೆ, ಉಡುಪಿ. | ಸಮಿತಿ ಸದಸ್ಯರು |
| 8 | ತಹಶೀಲ್ದಾರರು, ಕುಂದಾಪುರ ತಾಲ್ಲೂಕು, ಕುಂದಾಪುರ. | ಸಮಿತಿ ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಶ್ರೀನಿವಾಸುಲು**

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ–1)

ಜಲ ಸಂಪನ್ಮೂಲ ಇಲಾಖೆ

**P.R-417**
**S.C-50**

## ಕೃಷಿ ಸಚಿವಾಲಯ

**ವಿಷಯ** : ಸಾಲದ ಹೊರೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವ ರೈತರಿಗೆ ನೀಡಲಾಗುತ್ತಿರುವ ಪರಿಹಾರ ಮೊತ್ತವನ್ನು ರೂ.2.00 ಲಕ್ಷಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಕೃತೋಇ/280/ಕೃಉಇ/2003, ಬೆಂಗಳೂರು, ದಿನಾಂಕ: 18–07–2003.
2) ಆಯುಕ್ತರು, ಕೃಷಿ ಇಲಾಖೆರವರ ಪ್ರಸ್ತಾವನೆ ಸಂಖ್ಯೆ: ಉಕೃನಿ(ಬೆವಿ)/ರೈಆಹ/ಸ.ಆ.ಪ್ರ/2015–16, ದಿನಾಂಕ: 14–07–2015

**ಪ್ರಸ್ತಾವನೆ:**

ಬೆಳೆಹಾನಿ, ಸಾಲಬಾಧೆ ಬೆಲೆಕುಸಿತ ಇತ್ಯಾದಿ ಕಾರಣಗಳಿಂದ ಸಂಕಷ್ಟಕ್ಕೊಳಗಾದ ಹಲವಾರು ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದನ್ನು ಗಮನಿಸಿದ ರಾಜ್ಯ ಸರ್ಕಾರವು, ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2003–04ನೇ ಸಾಲಿನಿಂದ ಸಾಲದ ಹೊರೆಯಿಂದ ಆತ್ಮಹತ್ಯೆ ಮಾಡಿಕೊಂಡ ಪ್ರತಿಯೊಬ್ಬ ರೈತರ ಕುಟುಂಬಗಳಿಗೆ ತಲಾ 1.00 ಲಕ್ಷ ರೂ.ಗಳ (ರೂ. ಒಂದು ಲಕ್ಷ) ಪರಿಹಾರವನ್ನು ಒದಗಿಸಲು ಅವಕಾಶ ಕಲ್ಪಿಸಿರುತ್ತದೆ. ಆತ್ಮಹತ್ಯೆಗೆ ಸಾಲ ನೀಡುವ ಸಂಸ್ಥೆಗಳಿಂದ ಪಡೆದ ಸಾಲದ ಹೊರೆಯೇ ಸಂಭವನೀಯ ಕಾರಣವೆಂಬ ವಿಷಯವನ್ನು ದೃಢೀಕರಣ ಮಾಡಿಕೊಂಡು ಈ ಬಗ್ಗೆ ದೃಢೀಕರಣ ಪತ್ರ ನೀಡುವ ಬಗ್ಗೆ ಪ್ರತಿ ಉಪ ವಿಭಾಗ ಮಟ್ಟದಲ್ಲಿ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲಾಗಿದ್ದು ಸದರಿ ಸಮಿತಿಯ ನಿರ್ಣಯದ ಆಧಾರದ ಮೇರೆಗೆ ಸಾಲದ ಬಾಧೆಯಿಂದ ಸಂಕಷ್ಟಕ್ಕೊಳಗಾಗಿ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ರಾಜ್ಯ ಸರ್ಕಾರದ ವತಿಯಿಂದ ತಲಾ 1.00 ಲಕ್ಷ ರೂ.ಪರಿಹಾರವನ್ನು ನೀಡಲಾಗುತ್ತಿದೆ.

ದಿನಾಂಕ: 13–07–2015 ರಂದು ಮಾನ್ಯ ಮುಖ್ಯಮಂತ್ರಿಗಳು ರೈತರ ಆತ್ಮಹತ್ಯೆ ಪ್ರಕರಣಗಳು ಹೆಚ್ಚಾಗುತ್ತಿರುವುದು ವರದಿಯಾಗುತ್ತಿದ್ದು, ರೈತರ ಆತ್ಮಹತ್ಯೆ ವಿಷಯ ಕುರಿತು ರಾಜ್ಯ ಸರ್ಕಾರ ಗಂಭೀರವಾಗಿ ಪರಿಗಣಿಸಿದ್ದು, ರೈತರ ಹಿತಾಸಕ್ತಿ ಕಾಪಾಡಲು ಎಲ್ಲಾ ಕ್ರಮಗಳನ್ನು ವಹಿಸಲು ಬದ್ಧವಾಗಿರುತ್ತದೆ. ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ನೀಡಲಾಗುತ್ತಿರುವ ಪರಿಹಾರ ಮೊತ್ತವನ್ನು ರೂ.1.00 ಲಕ್ಷಗಳಿಂದ ರೂ.2.00 ಲಕ್ಷಗಳಿಗೆ ಹೆಚ್ಚಿಸುವುದಾಗಿ ವಿಧಾನಸಭೆಯಲ್ಲಿ ತಿಳಿಸಿರುತ್ತಾರೆ.

ಸಾಲದ ಹೊರೆಯಿಂದ ರೈತರು ಆತ್ಮಹತ್ಯೆ ಮಾಡಿಕೊಂಡ ಸಂದರ್ಭದಲ್ಲಿ ಅಂತಹ ಪ್ರತಿ ರೈತ ಕುಟುಂಬಕ್ಕೆ ರೂ. 1.00 ಲಕ್ಷದ (ರೂಪಾಯಿ ಒಂದು ಲಕ್ಷ) ಬದಲಾಗಿ ರೂ.2.00 ಲಕ್ಷ (ರೂಪಾಯಿ ಎರಡು ಲಕ್ಷ) ನಗದು ಪರಿಹಾರವನ್ನು ನೀಡಲು ಆದೇಶ ಹೊರಡಿಸಲು ಮೇಲೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಕೃಷಿ ಆಯುಕ್ತರು ಕೋರಿರುತ್ತಾರೆ. ಆತ್ಮಹತ್ಯೆಗೆ ಸಾಲದ ಹೊರೆಯೇ ಸಂಭವನೀಯ ಕಾರಣ ಎಂದು ಖಾತ್ರಿಪಡಿಸಿಕೊಂಡು ದೃಢೀಕರಣ ನೀಡುವ ಸಲುವಾಗಿ ಉಲ್ಲೇಖ–1ರ ಸರ್ಕಾರದ ಆದೇಶದನ್ವಯ ಪ್ರತಿ ಉಪ ವಿಭಾಗ ಮಟ್ಟದಲ್ಲಿ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸರ್ಕಾರ ರಚಿಸಿರುವ ಸಮಿತಿಯು ಮೊದಲಿನಂತೆ ಕಾರ್ಯನಿರ್ವಹಿಸಲು ಹಾಗೂ ಸಮಿತಿಯ ತೀರ್ಮಾನದ ಪ್ರಕಾರ ಈ ಹಿಂದಿನಂತೆ ಪರಿಹಾರ ವಿತರಿಸುವ ಬಗ್ಗೆ ಆದೇಶಿಸಲು ಸಹ ಕೋರಿರುತ್ತಾರೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂ. ಕೃಇ 57 ಕೃಉಇ 2015 ಬೆಂಗಳೂರು, ದಿನಾಂಕ: 17-07-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸಾಲದ ಹೊರೆಯಿಂದ ರೈತರು ಆತ್ಮಹತ್ಯೆ ಮಾಡಿಕೊಂಡ ಸಂದರ್ಭದಲ್ಲಿ ಆತ್ಮಹತ್ಯೆಗೆ ಸಾಲ ನೀಡುವ ಸಂಸ್ಥೆಗಳಿಂದ ಪಡೆದ ಸಾಲದ ಹೊರೆಯೇ ಕಾರಣವೆಂಬ ವಿಷಯವನ್ನು ಜಾರಿಯಲ್ಲಿರುವ ಪ್ರತಿ ಉಪ ವಿಭಾಗ ಮಟ್ಟದಲ್ಲಿ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯ ಸಮಿತಿಯು ನಿರ್ಣಯಿಸಿ ದೃಢೀಕರಿಸುವುದು. ಆನಂತರ ಅಂತಹ ಪ್ರತಿ ರೈತ ಕುಟುಂಬಕ್ಕೆ ರೂ.1.00 ಲಕ್ಷದಿಂದ (ರೂಪಾಯಿ ಒಂದು ಲಕ್ಷ) ರೂ.2.00 ಲಕ್ಷಗಳಿಗೆ (ರೂಪಾಯಿ ಎರಡು ಲಕ್ಷ) ಹೆಚ್ಚಿಸಿ ನಗದು ಪರಿಹಾರವನ್ನು ದಿನಾಂಕ: 01-04-2015 ರಿಂದ ಜಾರಿಗೆ ಬರುವಂತೆ ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ: 2401-00-800-1-40 ಉಪಶೀರ್ಷಿಕೆ (100)ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 273 ದಿ: 17-07-2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್.ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.(ಯೋಜನೆ)

**P.R-438**
**S.C-100**

## ಕಂದಾಯ ಸಚಿವಾಲಯ

**ವಿಷಯ :** ಮಣಿಪಾಲ್ ಅಕಾಡೆಮಿ ಆಫ್ ಹೈಯರ್ ಎಜುಕೇಷನ್ (ಮಾಹೆ) ಸಂಸ್ಥೆಯವರಿಗೆ ಸರ್ಕಾರಿ ಭೂಮಿಯನ್ನು ಮಂಜೂರು ಮಾಡಿದ ನಂತರ ಮಂಜೂರಾತಿ ಷರತ್ತು ಉಲ್ಲಂಘಿಸಿ ನಿಯಮಬಾಹಿರವಾಗಿ ಕಟ್ಟಡ ಕಟ್ಟಿರುವ ಕುರಿತು – ಶಿವಳ್ಳಿ ಗ್ರಾಮದ ಸರ್ವೆ ನಂ.57/1ಸಿ ರಲ್ಲಿನ 12.45 ಎಕರೆ ಜಮೀನಿಗೆ ಸಂಬಂಧಿಸಿದಂತೆ ಪರಿಷ್ಕೃತ ಆದೇಶ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ.ಸಿ.ಆರ್:84/2015-16/82308 ದಿನಾಂಕ: 14-05-2015.
2. ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 30 ಎಲ್‌ಜಿಎ 2015 ದಿನಾಂಕ: 05-06-2015.
3. ರಿಜಿಸ್ಟ್ರಾರ್ ಮಣಿಪಾಲ್ ಅಕಾಡೆಮಿ ಆಫ್ ಹೈಯರ್ ಎಜುಕೇಷನ್ ರವರ ಮನವಿ ದಿನಾಂಕ: 09-06-2015.

**ಪ್ರಸ್ತಾವನೆ:**

ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಶಿವಳ್ಳಿ, ಹೆರ್ಗ ಹಾಗೂ 80 ಬಡಗಬೆಟ್ಟು ಗ್ರಾಮಗಳ ವ್ಯಾಪ್ತಿಯಲ್ಲಿ ಮಣಿಪಾಲ್ ಅಕಾಡೆಮಿ ಆಫ್ ಹೈಯರ್ ಎಜುಕೇಷನ್, ಮತ್ತು ಮಣಿಪಾಲ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ರವರಿಗೆ ವಿವಿಧ ಸರ್ವೆ ನಂ.ಗಳಲ್ಲಿ ಮಂಜೂರಾಗಿರುವ ಒಟ್ಟು 266.27 ಎಕರೆ ವಿಸ್ತೀರ್ಣದ ಜಮೀನುಗಳ ಪೈಕಿ ಭಾಗಶಃ / ಪೂರ್ಣ ಷರತ್ತು ಉಲ್ಲಂಘನೆಯಾಗಿರುವ 109.38 ಎಕರೆ ಜಮೀನುಗಳಿಗೆ ಸಂಬಂಧಿಸಿದಂತೆ ಸದರಿ ಸಂಸ್ಥೆಯವರಿಂದ ಪ್ರಚಲಿತ ಮಾರ್ಗಸೂಚಿ ಬೆಲೆಯ ಮೂರು ಪಟ್ಟು ದಂಡವನ್ನು ವಸೂಲು ಮಾಡಿದ ನಂತರ, ಉದ್ದೇಶ ಬದಲಾವಣೆಗೆ ಘಟನೋತ್ತರ ಅನುಮತಿ ನೀಡಬಹುದೆಂದು ಉಡುಪಿ, ಜಿಲ್ಲಾಧಿಕಾರಿಯವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅದರಂತೆ ಸರ್ಕಾರವು ಪರಿಶೀಲಿಸಿ ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಹೊರಡಿಸಲಾಗಿದೆ. ಈ ಆದೇಶದಂತೆ ಸದರಿ ಸಂಸ್ಥೆಯು ದಂಡವನ್ನು ಇನ್ನೂ ಪಾವತಿಸಬೇಕಿದೆ.

ಏತನ್ಮಧ್ಯೆ, ಉಲ್ಲೇಖಿತ (3)ರ ಪತ್ರ ದಿನಾಂಕ: 09-06-2015ರಲ್ಲಿ ರಿಜಿಸ್ಟ್ರಾರ್ ಮಣಿಪಾಲ್ ಅಕಾಡೆಮಿ ಆಫ್ ಹೈಯರ್ ಎಜುಕೇಷನ್ ರವರು ಸದರಿ ಸಂಸ್ಥೆಗೆ ಮಂಜೂರು ಮಾಡಿರುವ ಶಿವಳ್ಳಿ ಗ್ರಾಮದ ಸರ್ವೆ ನಂ.57/1ಸಿ ರಲ್ಲಿನ 14.95ಎ ಜಮೀನಿನ ಪೈಕಿ 2.50ಎ ಜಮೀನಿಗೆ ಸಂಬಂಧಿಸಿದಂತೆ ಉದ್ದೇಶ ಬದಲಾವಣೆಗೆ ಜಿಲ್ಲಾಧಿಕಾರಿಯವರು ಅನುಮತಿ ನೀಡಿದ್ದು, ಉಳಿದ 12.45ಎ ಜಮೀನಿನಲ್ಲಿ ವಿದ್ಯಾರ್ಥಿಗಳ ಅವಶ್ಯಕತೆಗೆ ಅನುಗುಣವಾಗಿ ಹಾಸ್ಟೆಲ್ ಕಟ್ಟಡ ಕಟ್ಟಿದ್ದು, ಸದರಿ ಸಂಸ್ಥೆಯು ಯಾವುದೇ ಷರತ್ತು ಉಲ್ಲಂಘನೆ ಮಾಡದೆ ಇರುವ ಕಾರಣ, ಘಟನೋತ್ತರ ಅನುಮತಿ ಕೋರಿದ್ದಾರೆ.

ಈ ಬಗ್ಗೆ ಈಗಾಗಲೇ ದಿನಾಂಕ: 05-06-2015ರಂದು ಹೊರಡಿಸಿರುವ ಸರ್ಕಾರಿ ಆದೇಶದಲ್ಲಿ ಮೂರು ಪಟ್ಟು ದಂಡ ಪಾವತಿಸಿಕೊಂಡು ಉದ್ದೇಶ ಬದಲಾವಣೆಗೆ ಘಟನೋತ್ತರ ಅನುಮೋದನೆ ನೀಡಬೇಕೆಂದು ತಿಳಿಸಿರುವುದರಲ್ಲಿ, ಶಿವಳ್ಳಿ ಗ್ರಾಮದ ಸರ್ವೆ ನಂ. 57/1ಸಿ ರಲ್ಲಿನ 12.45ಎ ಜಮೀನು ಸಹ ಒಳಗೊಂಡಿದೆ. ಪರಿಶೀಲಿಸಲಾಗಿ, ದಿನಾಂಕ: 22-04-1969ರಲ್ಲಿ ಶಿವಳ್ಳಿ ಗ್ರಾಮದ ಸರ್ವೆ ನಂ.57/1ಸಿ ರಲ್ಲಿ 14.95ಎ ಜಮೀನನ್ನು ಆಟದ ಮೈದಾನ ಮತ್ತು ಈಜುಕೊಳ ನಿರ್ಮಿಸಲು ಮಂಜೂರಾಗಿದ್ದು, ಆ ಪೈಕಿ 2.50ಎ ಜಮೀನಿನಲ್ಲಿ ಫಾರ್ಮಸಿ ಕಾಲೇಜು ನಿರ್ಮಿಸಲು ಜಿಲ್ಲಾಧಿಕಾರಿರವರು ದಿನಾಂಕ: 22-02-1979ರಲ್ಲಿ ಉದ್ದೇಶ ಬದಲಾವಣೆಗೆ ಅನುಮತಿ ನೀಡಿದ್ದಾರೆ. ಉಳಿದ 12.45ಎ ಜಮೀನಿನಲ್ಲಿ ಆಟದ ಮೈದಾನ ಮತ್ತು ಈಜುಕೊಳ ನಿರ್ಮಿಸಬೇಕಾಗಿದ್ದರೂ ಸಹ ಅದರಲ್ಲಿ (1) ವಿಶ್ವವಿದ್ಯಾನಿಲಯ ಹೆಲ್ತ್ ಸೈಯನ್ಸ್ ಕಟ್ಟಡ, (2) ವಸತಿ ಗೃಹಗಳು, (3) ಕಾಲೇಜು ಕಟ್ಟಡಗಳು ಹಾಗೂ (4) ಉದ್ಯಾನ ವನಗಳನ್ನು ನಿರ್ಮಿಸಲಾಗಿದೆ. ಒಟ್ಟಾರೆ ಈ ಸಂಸ್ಥೆಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಜಮೀನು ಮಂಜೂರು ಮಾಡಲಾಗಿದ್ದು, ವಾಸ್ತವಾಗಿ ಕಟ್ಟಡಗಳನ್ನು ನಿರ್ಮಾಣ ಮಾಡುವಾಗ ಕೆಲವು ಆಂತರಿಕ ಬದಲಾವಣೆಗಳನ್ನು ವಿದ್ಯಾರ್ಥಿಗಳ ಅವಶ್ಯಕತೆಗೆ ಅನುಗುಣವಾಗಿ ಮಾಡಿಕೊಂಡಿದ್ದಾರೆ. ಇದರಿಂದಾಗಿ ಶೈಕ್ಷಣಿಕ ಉದ್ದೇಶದಲ್ಲಿ ಯಾವುದೇ ಬದಲಾವಣೆ ಆಗಿರುವುದಿಲ್ಲ, ಆದರೆ ಕೆಲವು ನಿರ್ಧಿಷ್ಟ ಉದ್ದೇಶಗಳನ್ನು ಅದಲು ಬದಲು ಮಾಡಿಕೊಂಡಿದ್ದಾರೆ.

ಈ ಹಿನ್ನೆಲೆಯಲ್ಲಿ ಶಿವಳ್ಳಿ ಗ್ರಾವದ ಸರ್ವೆ ನಂ. 57/1ಸಿ ರಲ್ಲಿನ 14.95ಎ ಪೈಕಿ 12.45ಎ ಜಮೀನಿಗೆ ಸಂಬಂಧಿಸಿದಂತೆ ಮಾತ್ರ ಪರಿಷ್ಕೃತ ಆದೇಶವನ್ನು ಹೊರಡಿಸುವ ಅವಶ್ಯಕತೆಯಿದೆ.

ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 30 ಎಲ್‌ಜಿಎ 2015 ದಿನಾಂಕ: 10–07–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 30 ಎಲ್‌ಜಿಎ 2015 ದಿನಾಂಕ: 05–06–2015ನ್ನು ಭಾಗಶಃ ಮಾರ್ಪಡಿಸಿ, ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಶಿವಳ್ಳಿ ಗ್ರಾಮದ ಸರ್ವೆ ನಂ.57/1ಸಿ ರಲ್ಲಿ ಕಸ್ತೂರಬಾ ಮೆಡಿಕಲ್ ಕಾಲೇಜ್ ಟ್ರಸ್ಟ್, ಮಣಿಪಾಲರವರಿಗೆ ಮಂಜೂರಾಗಿರುವ ಜಮೀನಿನ ಪೈಕಿ 12.45ಎ ಜಮೀನಲ್ಲಿ (1) ವಿಶ್ವವಿದ್ಯಾನಿಲಯ ಹೆಲ್ತ್ ಸೈಯನ್ಸ್ ಕಟ್ಟಡ, (2) ವಸತಿ ಗೃಹಗಳು–3, (3) ಕಾಲೇಜು ಕಟ್ಟಡಗಳು ಹಾಗೂ (4) ಉದ್ಯಾನವನ ಇವುಗಳನ್ನು ನಿರ್ಮಿಸಿರುವುದಕ್ಕೆ ಮಾತ್ರ ಉದ್ದೇಶ ಬದಲಾವಣೆಗೆ ಘಟನೋತ್ತರ ಅನುಮೋದನೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ–ಮಂ–2)

**P.R-439**
**S.C-25**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : 2015–16ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದಂತೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹೆಚ್ಚುವರಿ ಸಹಾಯಧನ ನೀಡುವ ಕುರಿತು.

**ಓದಲಾಗಿದೆ** :
1. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೈವಾಇ/ಕೈಅ/ಇ1/2015–16, ದಿನಾಂಕ: 05–05–2015.
2. ಕೈಗಾರಿಕಾ ನೀತಿ 2014–19 ಜಾರಿಗೆ ತಂದಿರುವ ಸರ್ಕಾರಿ ಆದೇಶ ಸಂಖ್ಯೆ: ಸಿಐ 58 ಎಸ್‌ಪಿಐ 2014, ದಿನಾಂಕ: 01–10–2014.

**ಪ್ರಸ್ತಾವನೆ:**

2015–16ನೇ ಸಾಲಿನ ಆಯವ್ಯಯದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಹೊಸ ಕೈಗಾರಿಕಾ ನೀತಿಯನ್ವಯ ಹಲವು ಯೋಜನೆಗಳನ್ನು ಘೋಷಿಸಲಾಗಿದ್ದು, ಅವುಗಳಲ್ಲಿ ಕಂಡಿಕೆ–412 (ಸಿ) ಈ ಕೆಳಕಂಡಂತಿರುತ್ತದೆ.

**"ಪರಿಶಿಷ್ಟ ಜಾತಿ / ಪಂಗಡದ ಉದ್ಯಮಶೀಲರಿಗೆ ಬಂಡವಾಳ ಹೂಡಿಕೆ ಸಹಾಯಧನದ ಜೊತೆ ಹೆಚ್ಚುವರಿಯಾಗಿ ರೂ. 15 ರಿಂದ 35 ಲಕ್ಷದವರೆಗೆ ಸಹಾಯಧನವನ್ನು ನೀಡಲಾಗುವುದು"**.

ಅದರಂತೆ ಹಾಗೂ ಮೇಲೆ ಓದಲಾದ (2)ರ ಕೈಗಾರಿಕಾ ನೀತಿ 2014–19ರಲ್ಲಿ ಅವಕಾಶ ಕಲ್ಪಿಸಿರುವಂತೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅತಿ ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ದಿಮೆದಾರರಿಗೆ ಈ ಕೆಳಕಂಡಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ / ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದಿಂದ ರಿಯಾಯಿತಿ ದರದಲ್ಲಿ ಭೂಮಿ / ಶೆಡ್ ಹಂಚಿಕೆ ಮಾಡುವಂತೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಕೋರಿರುತ್ತಾರೆ.

| **ಅ) ಹೈದ್ರಾಬಾದ್–ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿ ಇನ್ನುಳಿದ ಪ್ರದೇಶ:** | |
|---|---|
| ವಲಯ 1 ಮತ್ತು 2 | ಶೇ.40 – ಗರಿಷ್ಠ ಮಿತಿ ರೂ. 15 ಲಕ್ಷಗಳು |
| ವಲಯ 3 | ಶೇ. 30 – ಗರಿಷ್ಠ ಮಿತಿ ರೂ. 25 ಲಕ್ಷಗಳು |
| ವಲಯ 4 | ಶೇ. 25 – ಗರಿಷ್ಠ ಮಿತಿ ರೂ. 35 ಲಕ್ಷಗಳು |
| **ಆ) ಹೈದ್ರಾಬಾದ್–ಕರ್ನಾಟಕ ಪ್ರದೇಶ:** | |
| ವಲಯ 1 | ಶೇ. 40 – ಗರಿಷ್ಠ ಮಿತಿ ರೂ. 25 ಲಕ್ಷಗಳು |
| ವಲಯ 2 | ಶೇ. 40 – ಗರಿಷ್ಠ ಮಿತಿ ರೂ.20 ಲಕ್ಷಗಳು |

ಈ ಕಾರ್ಯಕ್ರಮಕ್ಕೆ ಅನುದಾನವನ್ನು ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆ ಅಡಿಯಲ್ಲಿ ರೂಪಿಸಲಾಗಿರುವ ಮಾರ್ಗಸೂಚಿಗಳನ್ವಯ ಭರಿಸಲಾಗುವುದು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 147 ಸಿಎಸ್‌ಸಿ 2015, ಬೆಂಗಳೂರು, ದಿನಾಂಕ: 22–07–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪರಿಶಿಷ್ಟ ಜಾತಿ / ಪಂಗಡದ ಉದ್ಯಮಶೀಲರಿಗೆ ಬಂಡವಾಳ ಹೂಡಿಕೆ ಸಹಾಯಧನದ ಜೊತೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಐ.ಎ.ಡಿ.ಬಿ.) ಮತ್ತು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ (ಕೆ.ಎಸ್.ಎಸ್.ಐ.ಡಿ.ಸಿ.) ಸಂಸ್ಥೆಗಳಿಂದ ಹಂಚಿಕೆ ಮಾಡಲಾಗುವ ಭೂಮಿ / ಮಳಿಗೆಗಳ ಮೇಲೆ ಈ ಕೆಳಕಂಡಂತೆ ರಿಯಾಯಿತಿಯನ್ನು ನೀಡಲು ಅನುಮೋದನೆ ನೀಡಲಾಗಿದೆ.

| | |
|---|---|
| **ಅ) ಹೈದ್ರಾಬಾದ್-ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿ ಇನ್ನುಳಿದ ಪ್ರದೇಶ:** | |
| ವಲಯ 1 ಮತ್ತು 2 | ಶೇ.40 – ಗರಿಷ್ಠ ಮಿತಿ ರೂ. 15 ಲಕ್ಷಗಳು |
| ವಲಯ 3 | ಶೇ. 30 – ಗರಿಷ್ಠ ಮಿತಿ ರೂ. 25 ಲಕ್ಷಗಳು |
| ವಲಯ 4 | ಶೇ. 25 – ಗರಿಷ್ಠ ಮಿತಿ ರೂ. 35 ಲಕ್ಷಗಳು |
| **ಆ) ಹೈದ್ರಾಬಾದ್-ಕರ್ನಾಟಕ ಪ್ರದೇಶ:** | |
| ವಲಯ 1 | ಶೇ. 40 – ಗರಿಷ್ಠ ಮಿತಿ ರೂ. 25 ಲಕ್ಷಗಳು |
| ವಲಯ 2 | ಶೇ. 40 – ಗರಿಷ್ಠ ಮಿತಿ ರೂ.20 ಲಕ್ಷಗಳು |

ಈ ರಿಯಾಯಿತಿಯ ಮರು ಪಾವತಿ ಮತ್ತು ರಿಯಾಯಿತಿ ದರ ನಿಗಧಿಪಡಿಸಲು ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಯ ಮಾರ್ಗಸೂಚಿಯನ್ನು ಪಾಲಿಸತಕ್ಕದ್ದು ಮತ್ತು ಪ್ರತಿ ಸಾಲಿನಲ್ಲಿ ಈ ಕಾರ್ಯಕ್ರಮವನ್ನು ಅನುಮೋದಿತ ಆಯವ್ಯಯದ ಹಂಚಿಕೆಯ ಮಿತಿಯಲ್ಲಿ ಅನುಷ್ಠಾನಗೊಳಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 48 ಎಫ್ಆರ್ಓ 2015, ದಿನಾಂಕ: 17-06-2015 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 673 ವೆಚ್ಚ-01 2015, ದಿನಾಂಕ: 08-07-2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್. ಶ್ರೀಕಂಠಬಾಬು**

ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR-434**
**SC-25**

## ಕಂದಾಯ ಸಚಿವಾಲಯ

**ವಿಷಯ :** ಆಯುಕ್ತರು, ರಾಜ್ಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಕಛೇರಿಗೆ ಹಣ ತೆಗೆಯುವ ಮತ್ತು ಬಟವಾಡೆ ಅಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** (1) ದಿನಾಂಕ: 17-06-2014 ರ ಸರ್ಕಾರದ ಆದೇಶ ಸಂಖ್ಯೆ: ಕಂಇ 175 ಆರ್‌ಇಹೆಚ್ 2013(ಭಾ).

**ಪ್ರಸ್ತಾವನೆ:**

ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ 2013ರ ಕಲಂ 44 ರಲ್ಲಿ ಅವಕಾಶ ಕಲ್ಪಿಸಿರುವಂತೆ ಆಯುಕ್ತರು, ರಾಜ್ಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಹಾಗೂ ಸರ್ಕಾರದ ಪದನಿಮಿತ್ತ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಯನ್ನು ಸೃಷ್ಟಿಸಿದ್ದು, ಸದರಿ ಕಛೇರಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 17-06-2014 ರ ಆದೇಶ ಸಂಖ್ಯೆ: ಕಂಇ 175 ಆರ್‌ಇಹೆಚ್ 2013(ಭಾ) ರಲ್ಲಿ ವಿವಿಧ ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಲಾಗಿದೆ.

ಈಗಾಗಲೇ ಆಯುಕ್ತರು, ರಾಜ್ಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಹಾಗೂ ಸರ್ಕಾರದ ಪದನಿಮಿತ್ತ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಕಛೇರಿಯು ಕಂದಾಯ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ, ಸಿಬ್ಬಂದಿಗಳ ವೇತನ ಮತ್ತಿತರೆ ವೆಚ್ಚಗಳನ್ನು ಭರಿಸಲು 2015-16ನೇ ಸಾಲಿನ ಲೆಕ್ಕ ಶೀರ್ಷಿಕೆ "2053-00-101-0-09- ಆಯುಕ್ತರು, ರಾಜ್ಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ, ಯೋಜನೇತರ" ಇದರ ಅಡಿಯಲ್ಲಿ ರೂ.99.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ಅಧಿಕಾರಿ/ನೌಕರರ ವೇತನ ಹಾಗೂ ಕಛೇರಿಗೆ ಅಗತ್ಯವಿರುವ ಇನ್ನಿತರೆ ವೆಚ್ಚಗಳನ್ನು ಭರಿಸಲು ಹಣ ತೆಗೆಯುವ ಮತ್ತು ಬಟವಾಡೆ ಅಧಿಕಾರಿಯನ್ನು ನೇಮಿಸಬೇಕಾಗಿರುತ್ತದೆ.ಅಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 141 ಆರ್‌ಇಹೆಚ್ 2014, ಬೆಂಗಳೂರು, ದಿನಾಂಕ: 16-07-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಹೊಸದಾಗಿ ಸೃಜನೆಯಾದ ಆಯುಕ್ತರು, ರಾಜ್ಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಹಾಗೂ ಸರ್ಕಾರದ ಪದನಿಮಿತ್ತ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಕಛೇರಿಯಲ್ಲಿನ ಅಧಿಕಾರಿ/ನೌಕರರ ವೇತನ ಹಾಗೂ ಕಛೇರಿಗೆ ಅಗತ್ಯವಿರುವ ಇನ್ನಿತರೆ ವೆಚ್ಚಗಳನ್ನು ಭರಿಸಲು, ಸರ್ಕಾರದ ಉಪ ಕಾರ್ಯದರ್ಶಿ, (ಪುನರ್ವಸತಿ ಮತ್ತು ಪುನರ್‌ನಿರ್ಮಾಣ), ಕಂದಾಯ ಇಲಾಖೆ ಇವರನ್ನು ಲೆಕ್ಕ ಶೀರ್ಷಿಕೆ "2053-00-101-0-09 ಆಯುಕ್ತರು, ರಾಜ್ಯ ಪುನರ್ವಸತಿ ಮತ್ತು ಪುನರ್ ನಿರ್ಮಾಣ, ಯೋಜನೇತರ" ಇದರ ಅಡಿಯಲ್ಲಿ, ಕರ್ನಾಟಕ ಆರ್ಥಿಕ ಸಂಹಿತೆ, ಅನುಚ್ಛೇಧ 17 (ಸಿ), 49 ಮತ್ತು 50 ರನ್ವಯ ಮಹಾಲೇಖಪಾಲರ ಪ್ರಾಧಿಕಾರ ಪಡೆಯುವ ಷರತ್ತಿನ ಮೇಲೆ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಯನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 09-07-2015ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 534 ವೆಚ್ಚ 7 / 2015 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ಮಾರುತಿ ಪ್ರಸನ್ನ**

ಸರ್ಕಾರದ ಅಧೀನ ಕಾರ್ಯದರ್ಶಿ-1

(ಪುನರ್ವಸತಿ ಮತ್ತು ಪುನರ್‌ನಿರ್ಮಾಣ) ಕಂದಾಯ ಇಲಾಖೆ.

**PR-435**
**SC-25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣೆ)ಯ ಉಪ ನಿಯಂತ್ರಕರು (ಆರ್ಥಿಕ ನಿರ್ವಹಣೆ), ಹುದ್ದೆಯನ್ನು ಜಂಟಿ ನಿಯಂತ್ರಕರು(ಆರ್ಥಿಕ ನಿರ್ವಹಣೆ) ಹುದ್ದೆಯನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 25 ರಾಲೆಪ 2015, ದಿನಾಂಕ: 26-02-2015.

2. ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣೆ), ಇವರ ಕಡತ ಸಂಖ್ಯೆ: ಎಫ್‌ಡಿ 03 ಸಿಎಂ 2007.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ(1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 25 ರಾಲೆಪ 2015, ದಿನಾಂಕ: 26-02-2015ರಲ್ಲಿ ಶ್ರೀಮತಿ ಸಿ.ಜಿ.ವಸುಂಧರಾ ದೇವಿ, ಉಪ ನಿಯಂತ್ರಕರು, ಆರ್ಥಿಕ ನಿರ್ವಹಣೆ, ಸರ್ಕಾರದ ಕಾರ್ಯದರ್ಶಿಗಳ ಕಚೇರಿ, ಆರ್ಥಿಕ ಇಲಾಖೆ, ವಿತ್ತೀಯ ಸುಧಾರಣೆ, ಇವರಿಗೆ ರೂ.40,050-56550/-ರ ವೇತನ ಶ್ರೇಣಿಯ ಜಂಟಿ ನಿಯಂತ್ರಕರ ಹುದ್ದೆಗೆ ಮುಂಬಡ್ತಿ ನೀಡಿ, ರಾಜ್ಯ ಕಾರ್ಯಕ್ರಮ ವ್ಯವಸ್ಥಾಪಕರು, ಸಂಜೀವಿನಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆ, ಬೆಂಗಳೂರು, ಹುದ್ದೆಗೆ ನೇಮಿಸಿದೆ.

ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಕಡತದಲ್ಲಿ ಸರ್ಕಾರದ ಅಪರ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣೆ), ಇವರು ಶ್ರೀಮತಿ ಸಿ.ಜಿ.ವಸುಂಧರಾದೇವಿ, ಜಂಟಿ ನಿಯಂತ್ರಕರು ಇವರನ್ನು ಬಡ್ತಿ ನೀಡಿ ನಿಯೋಜಿಸಿದ್ದ ರಾಜ್ಯ ಕಾರ್ಯಕ್ರಮ ವ್ಯವಸ್ಥಾಪಕರು, ಸಂಜೀವಿನಿ ಕರ್ನಾಟಕ ರಾಜ್ಯ ಗ್ರಾಮೀಣ ಜೀವನೋಪಾಯ ಸಂವರ್ಧನಾ ಸಂಸ್ಥೆ, ಬೆಂಗಳೂರು, ಹುದ್ದೆಯ ನೇಮಕಾತಿಯನ್ನು ಮಾರ್ಪಡಿಸಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿದ್ದ ಉಪ ನಿಯಂತ್ರಕರು, (ಆರ್ಥಿಕ ನಿರ್ವಹಣೆ), ಸರ್ಕಾರದ ಕಾರ್ಯದರ್ಶಿಗಳ ಕಚೇರಿ, ಆರ್ಥಿಕ ಇಲಾಖೆ (ವಿತ್ತೀಯ ಸುಧಾರಣೆ), ಹುದ್ದೆಯನ್ನು ಜಂಟಿ ನಿಯಂತ್ರಕರು(ಆರ್ಥಿಕ ನಿರ್ವಹಣೆ) ಹುದ್ದೆಗೆ ಉನ್ನತೀಕರಿಸಿ, ಸದರಿ ಹುದ್ದೆಯನ್ನು ದಿನಾಂಕ: 26-02-2015 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ, ದಿನಾಂಕ: 31-08-2016 ರವರೆಗೆ ನೇಮಿಸಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 259 ಸಲುಸೇ 2015 ಬೆಂಗಳೂರು; ದಿನಾಂಕ: 17ನೇ ಜುಲೈ 2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಉಪ ನಿಯಂತ್ರಕರು(ಆರ್ಥಿಕ ನಿರ್ವಹಣೆ), ಆರ್ಥಿಕ ಇಲಾಖೆ(ವಿತ್ತೀಯ ಸುಧಾರಣೆ), ಹುದ್ದೆಯನ್ನು ಜಂಟಿ ನಿಯಂತ್ರಕರು(ಆರ್ಥಿಕ ನಿರ್ವಹಣೆ) ಆರ್ಥಿಕ ಇಲಾಖೆ(ವಿತ್ತೀಯ ಸುಧಾರಣೆ) ಹುದ್ದೆಯನ್ನಾಗಿ ತಾತ್ಕಾಲಿಕವಾಗಿ ಉನ್ನತೀಕರಿಸಿ ಆದೇಶಿಸಿದೆ. ಸದರಿ ಹುದ್ದೆಯನ್ನು ದಿನಾಂಕ: 26-02-2015ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಶ್ರೀಮತಿ ಸಿ.ಜಿ.ವಸುಂಧರಾದೇವಿ, ರವರು ನಿವೃತ್ತಿ ಹೊಂದುವ ದಿನಾಂಕ: 31-08-2016 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಉನ್ನತೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

PR-436

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಪಸಂಮೀ 8 ಮೀಇಇ 2015 ಬೆಂಗಳೂರು, ದಿನಾಂಕ: 26-06-2015.**

ತಿದ್ದುಪಡಿ ಸಂಖ್ಯೆ: ಪಸಂಮೀ/45/ಮೀಇಇ/2014, ದಿನಾಂಕ: 27-08-2014 ರಲ್ಲಿನ ತಿದ್ದುಪಡಿ-1 ಮತ್ತು ತಿದ್ದುಪಡಿ-2 ಅನ್ನು ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

**ತಿದ್ದುಪಡಿ-1 ಕ್ಕೆ ಸಂಬಂಧಿಸಿದಂತೆ:-** ಸದರಿ ತಿದ್ದುಪಡಿಗಳು 2015-16ನೇ ಸಾಲಿನ ಮೀನುಗಾರಿಕೆ ಫಸಲಿ ವರ್ಷದಿಂದ ಅನ್ವಯವಾಗುತ್ತದೆ. 3ನೇ ಕೆರೆ ಅಥವಾ ನದಿ ಭಾಗದ ಕಾರ್ಯವ್ಯಾಪ್ತಿಯ ಗ್ರಾಮದಲ್ಲಿ ಆ ಸಂಘದ ಸಕ್ರಿಯ ಮೀನುಗಾರ ಸದಸ್ಯರಿದ್ದಲ್ಲಿ ಮಾತ್ರ 3ನೇ ಜಲಸಂಪನ್ಮೂಲವನ್ನು ಪಡೆಯಲು ಅರ್ಹರಿರುತ್ತಾರೆ.

**ತಿದ್ದುಪಡಿ-2 ಕ್ಕೆ ಸಂಬಂಧಿಸಿದಂತೆ:-** ಸದರಿ ತಿದ್ದುಪಡಿಗಳು 2015-16ನೇ ಸಾಲಿನ ಮೀನುಗಾರಿಕೆ ಫಸಲಿ ವರ್ಷದಿಂದ ಅನ್ವಯವಾಗುತ್ತದೆ. ಮೂಲ ಗುತ್ತಿಗೆ ನಿಯಮಾವಳಿ ಸಂಖ್ಯೆ: ಪಸಂಮೀ/125/ಮೀಇಇ/2013 ದಿನಾಂಕ: 21-02-2014 ರ ಆದೇಶದನ್ವಯ ಈಗಾಗಲೇ ಹೊರಡಿಸಿರುವ ಆದೇಶದ ಅನ್ವಯ ಗುತ್ತಿಗೆ ಅವಧಿ ಮತ್ತು ಗುತ್ತಿಗೆ ಮೊತ್ತ ಮುಗಿಯುವವರೆಗೆ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಶ್ಮಿ ಶಿವಶಂಕರ ಪೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ)

PR-437

SC-1000

## WATER RESOURCES SECRETARIAT

**Sub :** Establishment of State Project Management Unit (SPMU) and creation of new posts for the implementation of Dam Rehabilitation and Improvement Project (DRIP) with World Bank Loan Assistance - orders Issued.

**Read :**

1. Secretary, WRD, GoK D.O.Ltr No. WRD/7/DSP/2009 dtd: 22-2-2010
2. Chief Engineer, DSO Ltr No. 16/3/2010-DSRD/360 dtd:22-06-2010
3. G.O. No. WRD 07 DSP 2009, Bengaluru, dtd: 12-05-2011
4. Project Director (DRIP), Director (DSR), CWC. New Delhi Ltr No. 16/8/2010-DSRD, dtd: 29-10-2012
5. Chief Engineer, WRDO Ltr No. CE/WRDO/P&I/DRIP/TA-2/AE-3/ 2013-14/246, dtd: 04-02-2014; Ltr No. Nil/2014-15 dtd: 27-9-2014 and Ltr No. 179, dtd:26-12-2014

**PREAMBLE :**

The Government of Karnataka had expressed its interest in joining the World Bank aided Dam Rehabilitation and Improvement Project (DRIP) vide the letter read at SI.No(1) above.

In consideration of the Karnataka's interest in participating in DRIP, a copy of the Project Appraisal Document of the World Bank was sent with a request to send a proposal with the list of dams and their likely rehabilitation requirements with tentative cost estimate vide the letter read at Sl. No.(2). The importance of the State Project Management Unit (SPMU) is emphasized in the Annex- 6 of Page- 47 of the said Project Appraisal Document the and the Typical set-up of a SPMU is also provided at Page-51.

In the G.O. read at Sl. No.(3) above, Government has accorded administrative sanction for the implementation of Dam Rehabilitation and Improvement Project (DRIP) in Karnataka State with world Bank Loan Assistance, amounting to Rs,483.32 crore.

However, the agreed allocated share for Karnataka State has been indicated by the World Bank as Rs. 276.75 Crore (para 25 of Aide Memoire September 10-17-2012) vide CWC letter read at SI.No(4). Out of Rs. 276.75 Crore, Rs. 252.65 crore is earmarked for Dam Rehabilitation works to be taken up in 27 Dams and Rs. 24.10 Crore has been earmarked for Institutional Strengthening under Dam Rehabilitation and Improvement Project (DRIP).

On behalf of the State of Karnataka, the Project Agreement has been signed by the Chief Engineer, Water Resources Development Organisation & Nodal Officer (DRIP) on 22-11-2014 and the Project implementation period is up to September- 2018.

In the State of Karnataka the Project is proposed to be implemented for 27 dams (28 projects) of Water Resources Department through there respective Nigams, viz., CNNL, KNNL and KBJNL.

The Chief Engineer, Water Resources Development Organisation & Nodal Officer (DRIP) vide letters read at Sl.No:(4) above, has stated that as per the Project Appraisal Document of the World Bank and the Project agreement, a State Project Management Unit (SPMU) under the control of Chief Engineer, WRDO with Superintending Engineer (P & I) a project Director (SPMU –DRIP) has to be constituted along with multi disciplinary team specialists and supporting staff and to be made functional till the completion of project period for the effective co-ordination and management of the project at State level and has accordingly submitted a detailed proposal in this regard.

The salient features of the said proposal are as below:

1. The SPMU envisaged is to perform the following activities :

a) Overall Project Planning Management and Co-ordination Monitoring and Evaluation.

b) Technical assistance to support the Water Resouces Departrnent and Implementing agencies

c) Budget planning and control

d) Overall Procurement administration and monitoring.

e) Monitoring of Preparation of Environmental & Social Management frame work.

f) Monitoring of Preparation of Emergency Action Plans (EAP)

g) Grievance and compliant handling.

h) To Liaison all Project related matter with Central Water Commissions Water Resources Department, World Bank, Implementing agencies (NIGAMS) and other Related Government Departments/Organizations and Non-Governmental Groups.

2. Before the commencement of the project, establishment of State Project Management Unit is very essential in carrying out the preliminary works, such as clearance on hydrological review study for the proposed dams from Central Water Commission, Providing technical guidance for the preparation of Estirnates, preparation of Draft bidding documents etc., and for obtaining necessary approvals from competent authorities both at State level and Government of India.

3. Th establishment and management of State Project Management Unit under Dam Rehabilitation and Improvement Project (DRIP) is within the approved Project cost of Rs 276.75 Crore comprising of an Institutional Strengthening component of Rs24.10 crore.

4. The proposed State Project Management Unit (SPMU) will be under the control of Chief Engineer, Water Resources Development Organisation, Bangalore with Superintending Engineer (P & I) as Project Director (SPMU-DRIP) and would involve creation of 48 numbers of new temporary posts in different cadre/ specialized fields for the SPMU.

5. Out of 48 temporary posts proposed, 27 Posts are proposed to be filled up departmentally (by Concurrent charge/Transfer/Promotion/Deputation) and the remaining 21 posts are proposed to be filled up through outsourcing on need basis during the course of the project implementation.

6. Chief Engineer, Water Resources Development Organisation, Bangalore has also requested orders of the Government permitting him to fill up the following 21 posts through outsourcing for the State Project Management Unit on need basis during the period of project implementation:

| | | |
|---|---|---|
| a) | Quality Control Expert (Civil/Electro-Mechanical) | 2 |
| b) | Geologist | 1 |
| c) | Hydrologist | 1 |
| d) | Instrumentation Expert | 1 |
| e) | Electro-Mechanical/Gates Expert | 1 |
| f) | Web Manager /System analyst | 1 |
| g) | Computer Operator | 3 |
| h) | Driver | 4 |
| i) | Office Attendent | 5 |
| j) | Watchman | 2 |
| | **Total** | **21** |

7. Finance Department (PWFC-2) vide No: FD/53/FC-2/20 15 dated: 22-4-2015 has given concurrence to create 48 posts for State Project Management Unit (SPMU) in respect of world bank assisted Dam Rehabilitation and Improvement Project (DRIP), presently for one year and for further continuation with certain conditions.

8. A total budget allocation of Rs 3650 lakh is made for the year 2015-16 under the Head of Account "4701-80-800-0-80-059- Dam Rehabilitation and Improvement Project - EAP - Other expenses".

The Government having carefully examined the proposal of the Chief Engineer Water Resources Development Organisation, Bangalore & Nodal Officer (DRIP) has decided to accept the same. Accordingly, the Govemment passes the following orders:

**G.O.No: WRD 10 DSP 2014, BENGALURU, DATED: 27-05-2015**.

The State Project Management Unit (SPMU) is constituted under the control of Chief Engineer, Water Resources Development Organisation, with Superintending Engineer (P&I) as Project Director (SPM -DRIP) along with multi-disciplinary team specialists and supporting staff for the co-ordination, monitoring and management of the Dam Rehabilitation and Improvement Project (DRIP) at the State Level. The tenure of SPMU will be co-terminus with the project period of DRIP.

48 New temporary posts in different cadre/fields as detailed in the Annexure to this order is created for the State Project Managment Unit for a period of one year.

Out of 48 newly created temporary posts the Chief Engineer, Water Resources Development Organisation, is permitted to fill up the following 21 posts through outsourcing, for the State Project Management Unit on need basis, during the period of project implementation.

| | | |
|---|---|---|
| a) | Quality Control Expert (Civil/Electro-Mechanical) | 2 |
| b) | Geologist | 1 |
| c) | Hydrologist | 1 |
| d) | Instrumentation Expert | 1 |
| e) | Electro-Mechanical/Gates Expert | 1 |
| f) | Web Manager /System analyst | 1 |
| g) | Computer Operator | 3 |
| h) | Driver | 4 |
| i) | Office Attendent | 5 |
| j) | Watchman | 2 |
| | **Total** | **21** |

The remaining 27 posts as detailed in the Annexure shall be filled up departmentally by Concurrent charge/Transfer/Promotion/Deputation.

The pay and allowances for the temporary posts sanctioned shall be debited to the Head of Account: "4701-80-800-0-80-059 - Dam Rehabilitation and Improvement Project - EAP - Other expenses".

Necessary provision for funds to meet out the expenditure towards the formation/maintaining the State Project Management Unit shall be made in Budget/Revised Estimates every year, till the completion period of the project.

This order is issued with the concurrence of the Finance Department vide note No: FD/53/FC-2/2015 dated: 2-04-2015.

By Order and in the name of the Governor of Karnataka

**PAMPANAGOUDA MELSEEME**

Under Secretary to Government

Water Resources Department (Services-A)

**ANNEXURE TO G.O NO: WRD 10 DSP 2014, DATED: 27-5-2015**

Details of Temporary posts sanctioned for the State Project Management Unit (SPMU) under World Bank assisted Dam Rehabilitation and Improvement Project (DRIP) in Karnataka.

| Sl. No. | Name of the post and Scale of the pay | No. of posts Sanctioned | Posts to be filled up departmentally (by Concurrent charge/ Transfer / Promotion/ Deputation) | Posts to be filled up through outsourcing |
|---|---|---|---|---|
| **1** | **2** | **3** | **4** | **5** |
| **A) Cadre Posts (to be filled up departmentally)** | | | | |
| 1 | Project Director<br>Superintending<br>Engineer ( P&1 )<br>Rs 40050-56550 | 1 | 1 | - |
| 2 | Executive Engineer<br>Rs.36300-53850 | 2 | 2 | - |
| 3 | Assistant Executive Engineer<br>Rs. 28100-50100 | 6 | 6 | - |
| 4 | Assistant Engineer<br>Rs.22800-43200 | 10 | 10 | - |

| Sl. No. | Name of the post and Scale of the pay | No. of posts Sanctioned | Posts to be filled up departmentally (by Concurrent charge/ Transfer / Promotion/ Deputation) | Posts to be filled up through outsourcing |
|---|---|---|---|---|
| **1** | **2** | **3** | **4** | **5** |
| 5 | Accounts Officer<br>RS.28100-50100 | 1 | 1 | - |
| 6 | Audit Officer/<br>Accounts Superintendant<br>Rs 21600-40050/<br>Rs 20000-36300 | 1 | 1 | - |
| 7 | Superintendent<br>Rs.20000-36300 | 1 | 1 | - |
| 8 | First Division Accounts Assistant<br>Rs.14550-26700 | 2 | 2 | - |
| 9 | First Division Assistant<br>Rs.14550-26700 | 1 | 1 | - |
| 10 | Steno<br>Rs. 14550-26700 | 2 | 2 | - |
| | **SUB TOTAL-I** | **27** | **27** | **-** |
| **B)** | **Consolidated Pay Posts (Through Outsourcing)** | | | |
| 11 | Quality Control Expert (Civil/Electro-Mechanical)<br>(Rs 57000) | 2 | - | 2 |
| 12 | Geologist<br>(Rs 57000) | 1 | - | 1 |
| 13 | Hydrologist<br>(Rs 57000) | 1 | - | 1 |
| 14 | Instrumentation Expert<br>(Rs 57000) | 1 | - | 1 |
| 15 | Electro-Mechanical Gates Expert<br>(Rs 57000) | 1 | - | 1 |
| 16 | Web Manager /<br>System Analyst<br>(Rs 28000) | 1 | - | 1 |
| 17 | Computer Operator<br>(Rs 12650) | 3 | - | 3 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| Sl. No. | Name of the post and Scale of the pay | No. of posts Sanctioned | Posts to be filled up departmentally (by Concurrent charge/ Transfer / Promotion/ Deputation) | Posts to be filled up through outsourcing |
|---|---|---|---|---|
| 1 | 2 | 3 | 4 | 5 |
| 18 | Driver<br>(Rs 12650) | 4 | - | 4 |
| 19 | Office Attendant<br>(Rs 10000) | 5 | - | 5 |
| 20 | Watchman<br>(Rs 10000) | 2 | - | 2 |
| | **Sub Total-II** | **21** | **-** | **21** |
| | **Grand Total** | **48** | **27** | **21** |

**PAMPANAGOUDA MELSEEME**
Under Secretary to Government
Water Resources Department (Services-A)

**PR. 449**
**SC. 150**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59